ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಶಾಸಕರ ಆಪ್ತ ಸಹಾಯಕರಿಗೆ ವೇತನ ಬಿಡುಗಡೆ ವಿಳಂಬದ ಕುರಿತು

ಶ್ರೀ ಪುಟ್ಟಣ್ಣ (ಶಿಕ್ಷಕರ ಕ್ಷೇತ್ರ) -

179 (1357) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ವಿಧಾನಸಭೆ ಮತ್ತು ವಿಧಾನ ಪರಿಷತ್ ಸದಸ್ಯರುಗಳಿಗೆ ಆಪ್ತ ಸಹಾಯಕರಾಗಿ ನೇಮಕವಾಗಿ ನಿಯೋಜನೆ ಮೇರೆಗೆ ಬೆಂಗಳೂರು ಉತ್ತರ ತಾಲ್ಲೂಕು ಕಛೇರಿಯಲ್ಲಿ ವೇತನ ಪಡೆಯುತ್ತಿರುವ ವಿವಿಧ ಇಲಾಖೆಗಳ ನೌಕರರಿಗೆ ಕಳೆದ ನವೆಂಬರ್ ತಿಂಗಳಿನಿಂದ ವೇತನ ಬಿಡುಗಡೆ ಮಾಡದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; (ವಿವರ ನೀಡುವುದು)

(ಆ) ಸದರಿ ಆಪ್ತ ಸಹಾಯಕರುಗಳಿಗೆ ಕಳೆದ ಎರಡು ವರ್ಷಗಳಿಂದ ಡಿ.ಎ., ಬಾಕಿ ವೇತನ ಹಾಗೂ ವೈದ್ಯಕೀಯ ವೆಚ್ಚ ಮರುಪಾವತಿ ಹಣವನ್ನು ಬಿಡುಗಡೆ ಮಾಡದೆ ಇರಲು ಕಾರಣಗಳೇನು ;

(ಇ) ಸದರಿಯವರಿಗೆ ವೇತನ ಮತ್ತು ಇತರೆ ಭತ್ಯೆಗಳನ್ನು ಯಾವ ಕಾಲಮಿತಿಯಲ್ಲಿ ನೀಡಲಾಗುವುದು ?